# ॥ ವಧೂ-ವರಮಂಗಲಾಷ್ಟಕಗಳು॥

ವಿಘ್ನೇಶ್ವರೋ ವಿಘ್ನವಿದೂರಕಾರೀ ನಿರ್ವಿಘ್ನಕಾರ್ಯೇಷು ಫಲಪ್ರಸಿದ್ಧಃ।

ವಿಘ್ನೇಶ್ವರೋ ನಾಮ ಸುರೇಷು ಪೂಜ್ಯೋ ವಧೂವರಾಭ್ಯಾಂ ವರದಾ ಭವಂತು ॥

ಸುಮುಹೂರ್ತೇ ಸಾವಧಾನ ॥ ಸುಲಗ್ನೇ ಸಾವಧಾನ ॥

[ದೇವತೆಗಳಲ್ಲಿ ಆದಿಪೂಜ್ಯನೂ, ಎಲ್ಲ ಕಾರ್ಯಗಳಲ್ಲಿ ನಿರ್ವಿಘ್ನತೆಯನ್ನುಂಟು ಮಾಡುವವನೂ, ಪ್ರಸಿದ್ಧನೂ ಆದ ವಿಘ್ನೇಶ್ವರನು ವಧೂವರರನ್ನು ಹರಸಲಿ... ಈಗ ಶುಭ ಮುಹೂರ್ತದ ಸಮಯ ಎಲ್ಲರೂ ಇತ್ತ ಚಿತ್ತೈಸಿರಿ ]

ಆದಾವಂಬುಜಸಂಭವಾದಿವಿನುತಃ ಶಾಂತೋಽಜಿತಃ ಶಾಶ್ವತಃ

ಸಂಪುಲ್ಲಾಮರಪುಂಡರೀಕನಯನಃ ಪುಣ್ಯಃ ಪುರಾಣಃ ಪುಮಾನ್ ।

ಲೋಕೇಶಃ ಶ್ರುತಿಚೋದಿತೋ ಮುರಹರೋ ಮತ್ಸ್ಯಾವತಾರೋ ಹರಿಃ

ಶ್ರೀಮಾನ್ಸಿಂಹಗಿರೀಶ್ವರಃ ಕರುಣಯಾ ದದ್ಯಾತ್ಸದಾ ಮಂಗಳಮ್ ॥

ಸುಮುಹೂರ್ತೇ ಸಾವಧಾನ ॥ ಸುಲಗ್ನೇ ಸಾವಧಾನ ॥ 01 ॥

[ಮೊದಲು ನೀರಿಂದುದಿಸಿದ, ಶಾಂತಸ್ವಭಾವನೂ, ಶಾಶ್ವತನೂ ಆದ, ವೇದಪ್ರತಿಪಾದ್ಯನಾಗಿರುವ ಲೋಕದೊಡೆಯ ಶ್ರೀಹರಿಯು ಮತ್ಸ್ಯಾವತಾರಿಯಾಗಿ ನಮ್ಮನ್ನನುಗ್ರಹಿಸಲು ಸಿಂಹಗಿರಿಯಲ್ಲಿ ವಿರಾಜಮಾನನಾಗಿರುವನು. ಅವನು ನಮಗೆ ಮಂಗಳವನ್ನುಂಟುಮಾಡಲಿ. ಶುಭ ಮುಹೂರ್ತದ ಸಮಯ ಎಲ್ಲರೂ ಇತ್ತ ಚಿತ್ತೈಸಿರಿ ]

ಸರ್ವೇಷು ಕಾರ್ಯೇಷ್ವಖಿಲಾರ್ಥಸಿದ್ಧಿರ್ವಾಗೀಶ್ವರೀ ಸತ್ಯವತೀ ಚ ದುರ್ಗಾ ।

ಸರಸ್ವತೀ ನಾಮ ವಿಧಾತೃಪತ್ನೀ ವಧೂವರಾಭ್ಯಾಂ ವರದಾ ಭವಂತು ॥

ಸುಮುಹೂರ್ತೇ ಸಾವಧಾನ ॥ ಸುಲಗ್ನೇ ಸಾವಧಾನ ॥

[ಎಲ್ಲ ಕಾರ್ಯಗಳಲ್ಲೂ ಎಲ್ಲ ರೀತಿಯ ಸಂಪದಗಳನ್ನುಂಟುಮಾಡುವ ವಾಗ್ದೇವತೆ ಬ್ರಹ್ಮನರಾಣಿಯಾದ ಸರಸ್ವತೀ ಈ ವಧೂವರರನ್ನು ಹರಸಲಿ. ಇದು ಶುಭ ಸಮಯ ಇಲ್ಲಿ ಚಿತ್ತೈಸಿರಿ.]

ಸಪ್ತದ್ವೀಪಕುಲಾಚಲೇಂದ್ರಜಲಧೌ ಸಾಮ್ಯಂ ಚ ಸಂಕ್ರಾಮತೋ

ಭಾನೋರ್ಮಾಲಿಫಣೀಂದ್ರಮಂಡಲಧರೋ ಮಂದಾರಮಾಲಾರ್ಚಿತಃ।

ಭಾವಜ್ಞೋ ಬಹುಚಕ್ರಲಾಂಛಿತತನುಃ ಕೂರ್ಮಾವತಾರೋ ಹರಿಃ

ಶ್ರೀಮಾನ್ಸಿಂಹಗಿರೀಶ್ವರಃ ಕರುಣಯಾ ದದ್ಯಾತ್ಸದಾ ಮಂಗಳಮ್ ||

ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ || 02 ||

[ತನ್ನ ಬೆನ್ನಿನ ಮೇಲೆ ವಾಸುಕಿಯಿಂದಾವೃತವಾದ ಮಂದಾರ ಪರ್ವತವನ್ನೇ ಎತ್ತಿ ಹಿಡಿದ ಏಳುದ್ವೀಪಗಳನ್ನೂ ಪರ್ವತ ಸಮೂಹಗಳನ್ನೂ ಸಮುದ್ರಗಳನ್ನೂ ವ್ಯಾಪಿಸಿ ನಿಂತ ಚಕ್ರಚಿಹ್ನಿತನಾದ ಕೂರ್ಮ ರೂಪೀ ಹರಿಯು ಈ ಸಿಂಹಗಿರಿ ನಿವಾಸಿಯು ನಮಗೆ ಮಂಗಳವನ್ನುಂಟುಮಾಡಲಿ. ಶುಭ ಮುಹೂರ್ತದ ಸಮಯ ಎಲ್ಲರೂ ಇತ್ತ ಚಿತ್ತೈಸಿರಿ ]

ವಸಂತಲಕ್ಷ್ಮೀರ್ವನರಾಜಲಕ್ಷ್ಮೀಃ, ಕ್ಷೀರಾಬ್ಧಿಪುತ್ರೀ ಕಮಲಾಯತಾಕ್ಷೀ |

ಶ್ರೀವಿಷ್ಣುಪತ್ನೀ ಭುವನೈಕಮಾತಾ ವಧೂವರಾಭ್ಯಾಂ ವರದಾ ಭವಂತು ||

ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ ||

[ಕ್ಷೀರಸಾಗರನ ಮಗಳಾದ ಲಕ್ಷ್ಮಿಯು ವಸಂತಲಕ್ಷ್ಮಿಯೂ ವನರಾಜನ ಲಕ್ಷ್ಮಿಯೂ ಆಗಿ ಕಂಗೊಳಿಸುತ್ತಿದ್ದಾಳೆ. ಇವಳು ಸಕಲಲೋಕಕ್ಕೆ ತಾಯಿ ಮತ್ತು ಶ್ರೀವಿಷ್ಣುವಿನ ಮಡದಿಯಾಗಿರುವವಳು. ಆಕೆ ಈ ವಧೂವರರನ್ನು ಹರಸಲಿ. ಇದು ಶುಭ ಸಮಯ ಇಲ್ಲಿ ಚಿತ್ತೈಸಿರಿ.]

ಲೀಲಾಲೋಡಿತಸರ್ವಸಾಗರಜಲಾತ್ಸಂಪೂರ್ಣಚಂದ್ರಪ್ರಭೋ

ಹೇಮಾಕ್ಷಃ ಸುರಖಂಡನೋ ಭುಜಗದಾಚಕ್ರಾಂಕಿತಃ ಸಂತತಃ |

ದಂಷ್ಟ್ರಾಗ್ರೇ ಧೃತಮೇದಿನೀ ಮುರಹರಃ ಕ್ರೋಢಾವತಾರೋ ಹರಿಃ

ಶ್ರೀಮಾನ್ಸಿಂಹಗಿರೀಶ್ವರಃ ಕರುಣಯಾ ದದ್ಯಾತ್ಸದಾ ಮಂಗಳಮ್ ||

ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ || 03 ||

[ಜಲದಿಂದ ಆವೃತವಾಗುತ್ತಿದ್ದ ಈ ಭೂಮಿಯನ್ನು ಲೀಲೆಯಿಂದೆತ್ತಿ, ಗದೆಯನ್ನೂ ಚಕ್ರವನ್ನೂ ಪಿಡಿದು ದುಷ್ಟಶಕ್ತಿಗಳಿಂದ ಕಾಪಾಡುತ್ತಾ, ಭೂಮಿಯನ್ನು ತನ್ನ ಕೋರೆಗಳಿಂದೆತ್ತಿ ರಕ್ಷಿಸಿದ ವರಾಹರೂಪೀ ವಿಷ್ಣುವು ಈ ಸಿಂಹಗಿರಿಯ ನಿವಾಸಿಯಾಗಿರುವನು. ಆತ ನಮಗೆ ಮಂಗಳವನ್ನುಂಟುಮಾಡಲಿ. ಶುಭ ಮುಹೂರ್ತದ ಸಮಯ ಎಲ್ಲರೂ ಇತ್ತ ಚಿತ್ತೈಸಿರಿ ]

ಶಿವಸ್ಯಪತ್ನೀ ಗಿರಿರಾಜಪುತ್ರೀ ಸೌವರ್ಣದಿವ್ಯಾಂಬರರತ್ನಭೂಷಾ |

ಕಲ್ಯಾಣಗೌರೀ ಶುಭಮಂಗಳಾಂಗೀ ವಧೂವರಾಭ್ಯಾಂ ವರದಾ ಭವಂತು ||

ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ ||

[ಶುಭಮಂಗಳರೂಪೆಯಾಗಿ ಬಂಗಾರ ಬಣ್ಣದ ಬಟ್ಟೆಯನು ತೊಟ್ಟು, ಕಲ್ಯಾಣಿಯಾಗಿ ಕಂಗೊಳಿಸುತಿರುವ, ಪರ್ವತರಾಜನ ಕುವರಿ ಪಾರ್ವತೀ ಶಿವನ ಅರ್ಧಾಂಗಿ ಈ ವಧೂವರರನ್ನು ಹರಸಲಿ. ಇದು ಶುಭ ಸಮಯ ಇಲ್ಲಿ ಚಿತ್ತೈಸಿರಿ.]

ಕುಂದೇಂದುಸ್ಫಟಿಕಪ್ರಭೋ ಬಹುಭುಜೋ ಭೂಷಃ ಸಹಸ್ರೋಜ್ವಲೋ

ದೈತ್ಯೇಂದ್ರೋ ಧೃತಧಾರಣಾದಿನಿಪುಣಃ ಸ್ತಂಭೋದ್ಭವೋ ಭೀಕರಃ |

ಪ್ರಹ್ಲಾದಾರ್ತಿಹರೋ ಮೃಗೋ ನರಮೃಗಃ ಶ್ರೀನಾರಸಿಂಹೋ ಹರಿಃ

ಶ್ರೀಮಾನ್ಸಿಂಹಗಿರೀಶ್ವರಃ ಕರುಣಯಾ ದದ್ಯಾತ್ಸದಾಮಂಗಳಮ್ ||

ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ || 04 ||

[ಚಂದ್ರಕಾಂತಿಯ ಚೆಲುವು ಮತ್ತು ಸಾವಿರ ಸೂರ್ಯನ ಹೊಳಪುಗಳಿಂದ ಕೂಡಿದವನಾಗಿ, ದೈತ್ಯೇಂದ್ರನಾದ ಹಿರಣ್ಯಕಶಿಪುವನ್ನು ಪಳಗಿಸಲು ಧರೆಗೆ ಸ್ತಂಭದಿಂದ ಆವಿರ್ಭವಿಸಿದ ನರ ಮತ್ತು ಸಿಂಹರ ರೂಪಗಳಿಂದ ಕೂಡಿದ ಪ್ರಹ್ಲಾದನ ಆರ್ತ ಕರೆಗೆ ಕರಗಿದ ಶ್ರೀನಾರಸಿಂಹನು ಕರುಣೆಯಿಂದ ಮಂಗಳವನ್ನುಂಟುಮಾಡಲಿ. ಶುಭ ಮುಹೂರ್ತದ ಸಮಯ ಎಲ್ಲರೂ ಇತ್ತ ಚಿತ್ತೈಸಿರಿ ]

ಶ್ರೀರಾಮಪತ್ನೀ ಜನಕಸ್ಯ ಪುತ್ರೀ ಸೀತಾಂಗನಾ ಸುಂದರಕೋಮಲಾಂಗೀ |

ದಿವ್ಯಾಂಗನಾ ರತ್ನವಿಭೂಷಣಾಢ್ಯಾ ವಧೂವರಾಭ್ಯಾಂ ವರದಾ ಭವಂತು ||

ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ ||

[ಶ್ರೀರಾಮನ ಹೆಂಡತಿಯೂ, ಜನಕನ ಪುತ್ರಿಯೂ, ಆದ ಸೀತೆ ದಿವ್ಯಸೌಂದರ್ಯ ಭರಿತೆಯಾಗಿ ರತ್ನಾಲಂಕಾರ ಭೂಷಿತೆಯಾಗಿ ನೂತನ ವಧೂವರರನ್ನು ಹರಸಲಿ. ಇದು ಶುಭ ಸಮಯ ಇಲ್ಲಿ ಚಿತ್ತೈಸಿರಿ.]

ದಾತೃಕ್ಷಾಳಿತಪಾದಪಂಕಜಜಗಚ್ಚೇತೋ ಮಹಚ್ಚಾಂಬರಃ

ಪ್ರಕ್ಷಾಳೀಕೃತಪಾದಸೌರಭಜಗಜ್ಜಾಲೋ ಜಗಜ್ಜೀವನಃ |

ಭಿಕ್ಷಾರ್ಥೀ ಬಲಿದರ್ಪದೋ ವಟುಪಟುಃ ಕುಬ್ಜಾವತಾರೋ ಹರಿಃ

ಶ್ರೀಮಾನ್ಸಿಂಹಗಿರೀಶ್ವರಃ ಕರುಣಯಾ ದದ್ಯಾತ್ಸದಾ ಮಂಗಳಮ್ ||

ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ || 05 ||

[ಪಾದ ತೊಳೆದ ಬಲಿಗೆ ಆಕಾಶದ ತುಂಬಾ ಪಾದವನ್ನೇ ತೋರಿಸಿದ, ಇಡೀ ಜಗತ್ತನ್ನೂ ವ್ಯಾಪಿಸುವ ಪಾದ ಪಂಕಜಗಳನ್ನು ಹೊಂದಿದ, ಭಿಕ್ಷಾವ್ಯಾಜದಲ್ಲಿ ಬಂದ ಸುಂದರ ವಟುವಾದ ವಾಮನನು ಈ ಸಿಂಹಗಿರಿನಿವಾಸಿಯಾಗಿದ್ದು, ನಮಗೆ ಸದಾ ಮಂಗಳವನ್ನುಂಟುಮಾಡಲಿ. **ಶುಭ ಮುಹೂರ್ತದ ಸಮಯ ಎಲ್ಲರೂ ಇತ್ತ ಚಿತ್ತೈಸಿರಿ. ]**

ಪಾಂಚಾಲಪುತ್ರೀ ಮಣಿರತ್ನಧಾರೀ ದಿವ್ಯಾಂಗನಾ ದ್ರೌಪದಿನಾಮಧೇಯಾ |
ಪುಣ್ಯಾಸತೀ ಪಾಂಡವಧರ್ಮಪತ್ನೀ ವಧೂವರಾಭ್ಯಾಂ ವರದಾ ಭವಂತು ||

**ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ ||**

[ಪಾಂಚಾಲ ರಾಜನ ಮಗಳಾಗಿರುವ, ಅಗ್ನಿ ಸಂಭವೆಯಾದ, ಮಣಿ ಮುಕುಟ ಮಾಣಿಕ್ಯಗಳಿಂದಲಂಕೃತಳಾದ ದ್ರೌಪದಿಯು ಪುಣ್ಯವತಿಯೂ ಪಾಂಡವರ ಧರ್ಮ ಪತ್ನಿಯೂ ಆಗಿದ್ದು ಪ್ರಕೃತ ಈ ವಧೂವರರನ್ನು ಹರಸಲಿ. **ಇದು ಶುಭ ಸಮಯ ಇಲ್ಲಿ ಚಿತ್ತೈಸಿರಿ.]**

**ಸದ್ಯಃಖಂಡಿತರಾಜಮಂದರಗಿರಿರ್ನಿರ್ಧೌತಸಂತೋಷಿತಃ**
**ಸಂತರ್ಪೀ ಪಿತೃಪೈತೃಕಾದಿಪಿತೃವತ್ಪ್ರಾಲಸ್ತಪೋ ನಿಷ್ಠಿತಃ |**
**ವೇದಜ್ಞೋ ಜಮದಗ್ನಿಜಃ ಪರಶುಮಾನ್ರಾಮಾವತಾರೋ ಹರಿಃ**
**ಶ್ರೀಮಾನ್ಸಿಂಹಗಿರೀಶ್ವರಃ ಕರುಣಯಾ ದದ್ಯಾತ್ಸದಾ ಮಂಗಳಮ್ ||**

**ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ || 06 ||**

[ಜಗತ್ತಿನ ರಾಜರುಗಳ ಮಹಾ ಪರ್ವತವನ್ನೇ ಬುಡಮೇಲು ಮಾಡಿ ತುಂಡರಿಸಿದ, ರಾಜವಂಶಗಳನ್ನೇ ತೊಳೆದು ಸಂತೋಷಗೊಂಡ, ಪಿತೃಪರಂಪರೆಗೆ ವಿಶೇಷ ಆದರವನ್ನು ನೀಡಿದ ತಪಸ್ವಿಯೂ, ವೇದಜ್ಞನೂ ಆದ ಜಮದಗ್ನಿಯ ಮಗ ಪರಶುರಾಮನು ಈ ಸಿಂಹಗಿರಿಯ ಒಡೆಯನಾಗಿಹನು. ಆತ ನಮಗೆ ಸದಾ ಮಂಗಳವನ್ನುಂಟುಮಾಡಲಿ. **ಶುಭ ಮುಹೂರ್ತದ ಸಮಯ ಎಲ್ಲರೂ ಇತ್ತ ಚಿತ್ತೈಸಿರಿ. ]**

ಪುಲೋಮಕನ್ಯಾ ಪುರುಹೂತಪತ್ನೀ ಶಚೀತಿನಾಮ್ನೀ ಕುಚಹೇಮಕುಂಭಾ |
ಸಂಪೂರ್ಣಚಂದ್ರಾನನಕೋಮಲಾಂಗೀ ವಧೂವರಾಭ್ಯಾಂ ವರದಾ ಭವಂತು ||

**ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ ||**

[ಪುಲೋಮನ ಮಗಳಾಗಿ ಹುಟ್ಟಿ, ಪುರುಹೂತನ ಮಡದಿಯಾಗಿರುವ ಶಚೀ ದೇವಿಯು, ಸುಂದರಳೂ, ಪೂರ್ಣಚಂದ್ರನಮೈಕಾಂತಿಯಿಂದ ಕಂಗೊಳಿಪ ಕೋಮಲೆಯು ಈ ವಧೂವರರನ್ನು ಹರಸಲಿ. ಇದು ಶುಭ ಸಮಯ ಇಲ್ಲಿ ಚಿತ್ತೈಸಿರಿ.]

ರಾಜೇಂದ್ರೋ ರಣರಂಗರಾಜವಿಜಿತಾನೇಕಾಸುರೋ ಭಾಸುರಾ-

-ಕಾರೋ ರಾವಣಕಂಠಖಂಡನಪಟುಃ ಕೋದಂಡದೀಕ್ಷಾ ಗುರುಃ |

ಸೀತೇಶಃ ಸುರಮೌನಿಸಜ್ಜನನುತಾ ರಾಮಾವತಾರೋ ಹರಿಃ

ಶ್ರೀಮಾನ್ಸಿಂಹಗಿರೀಶ್ವರಃ ಕರುಣಯಾ ದದ್ಯಾತ್ಸದಾ ಮಂಗಳಮ್ ||

ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ || 07 ||

[ರಾಜರಿಗೆ ರಾಜನಾಗಿ, ರಣರಂಗದಲ್ಲಿ ಅನೇಕ ರಾಕ್ಷಸರ ಸಂಹಾರ ಮಾಡಿದ, ದೇದೀಪ್ಯಮಾನ ತೇಜಸ್ಸಿನಿಂದ ಕೂಡಿದ, ರಾವಣನ ಮರಣಕ್ಕೆ ಕಾರಣನಾದ, ದೇವತೆಗಳಿಂದ-ಮುನಿಗಳಿಂದ - ಸಜ್ಜನರಿಂದ ಸದಾ ಸ್ತುತಿಸಲ್ಪಡುವ, ಕೋದಂಡರಾಮ- ಸೀತಾರಾಮ- ಶ್ರೀರಾಮ- ಹರಿಯ ಅವತಾರವಾಗಿ ಸಿಂಹಗಿರಿಯಲ್ಲಿ ವಾಸವಾಗಿಹನು. ಆತ ನಮಗೆ ಮಂಗಳವನ್ನುಂಟುಮಾಡಲಿ. ಶುಭ ಮುಹೂರ್ತದ ಸಮಯ ಎಲ್ಲರೂ ಇತ್ತ ಚಿತ್ತೈಸಿರಿ. ]

ಪತಿವ್ರತಾಲಕ್ಷಣಲಕ್ಷಿತಾಂಗೀ ಸನ್ಮಾರ್ಗಗಾಮ್ನೀ ಶುಭಸೌಖ್ಯದಾ ಚ |

ಅರುಂಧತೀ ನಾಮವಸಿಷ್ಠಪತ್ನೀ ವಧೂವರಾಭ್ಯಾಂ ವರದಾ ಭವಂತು ||

ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ ||

[ಪತಿವ್ರತೆಗೆ ಹೇಳಿದ ಎಲ್ಲ ಲಕ್ಷಣಗಳನ್ನೂ ಮೈಗೂಡಿಸಿಕೊಂಡ, ಸನ್ಮಾರ್ಗದಲ್ಲಿ ಸಾಗುವ ಮನಸ್ಸುಳ್ಳ, ಶುಭಮಂಗಳೆಯಾದ ವಸಿಷ್ಠ ಮಹರ್ಷಿಯ ಪತ್ನಿಯಾದ ಅರುಂಧತಿಯು ಈ ವಧೂವರರನ್ನು ಹರಸಲಿ. ಇದು ಶುಭ ಸಮಯ ಎಲ್ಲರೂ ಇಲ್ಲಿ ಚಿತ್ತೈಸಿರಿ.]

ಕಾಲಿಂದೀಬಲಭೇದನೋ ಬಹುಬಲಶ್ಚಂಡಪ್ರಲಂಬಾಸುರಾನ್

ಪ್ರಧ್ವಂಸೀ ಮುಸಲಾಯುಧೋ ಹಲಧರೋ ನೀಲಾಂಬರೋ ನಿರ್ಮಲಃ |

ಲಾವಣ್ಯಾಮಿತರೇವತೀ ಪತಿವರಃ ಕೃಷ್ಣಾವತಾರೋ ಹರಿಃ

ಶ್ರೀಮಾನ್ಸಿಂಹಗಿರೀಶ್ವರಃ ಕರುಣಯಾ ದದ್ಯಾತ್ಸದಾ ಮಂಗಳಮ್ ||

ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ || 08 ||

[ಕಾಲೀಯನೆಂಬ ಮಹಾನಾಗನ ಬಲವನ್ನೇ ಹೀರಿದ, ಬಹುಬಲನೂ, ನೂರಾರು ಅಸುರರನ್ನು ಸೆದೆಬಡಿದ ಪರಾಕ್ರಮಿಯೂ, ಒನಕೆ, ನೇಗಿಲುಗಳನ್ನೇ ಆಯುಧವಾಗಿ ಬಳಸಿದ ಮಹಾ ಚತುರನೂ, ನೀಲವಸ್ತ್ರಧಾರಿಯೂ, ನಿರ್ಮಲನೂ, ಅಮಿತವಾಗಿ ಸ್ತ್ರೀಯರಿಗೆ ರಕ್ಷೆಯನ್ನು ನೀಡಿದ ಮಹಾಪತಿಯಾದ ಶ್ರೀಕೃಷ್ಣನು ಹರಿಯ ಅವತಾರಿಯಾಗಿ ಸಿಂಹಗಿರಿಯಲ್ಲಿ ವಾಸವಾಗಿಹನು. ಆತ ಸದಾ ನಮಗೆ ಮಂಗಳಕರನಾಗಲಿ. ಶುಭ ಮುಹೂರ್ತದ ಸಮಯ ಎಲ್ಲರೂ ಇತ್ತ ಚಿತ್ತೈಸಿರಿ. ]

ಚಕೋರನೇತ್ರೀ ಚಪಲಾಯತಾಕ್ಷೀ ಸೌಂದರ್ಯರೂಪೀ ನವಚಂದ್ರರೇಖಾ |
ನಲಸ್ಯಪತ್ನೀ ದಮಯಂತಿನಾಮ(ನಾಮ್ನೀ) ವಧೂವರಾಭ್ಯಾಂ ವರದಾ ಭವಂತು ||
ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ ||

[ದೊಡ್ಡ ಕಂಗಳನ್ನು ಹೊಂದಿರುವ, ಚಂಚಲೆಯಾದ, ಸೌಂದರ್ಯವತಿಯಾಗಿ ಚಂದ್ರಕಾಂತಿಯಿಂದ ಕೂಡಿದ, ನಲನ ಪತ್ನಿಯಾದ, ದಮಯಂತೀ ಈ ನೂತನ ವಧೂವರರನ್ನು ಹರಸಲಿ. ಇದು ಶುಭ ಸಮಯ ಎಲ್ಲರೂ ಇಲ್ಲಿ ಚಿತ್ತೈಸಿರಿ.]

ಧರ್ಮಜ್ಞಸ್ತ್ರಿಪುರಾದಿನಾಕನಮಿತೋ ಧರ್ಮೋಪನಿಷ್ಠಾರತಃ
ಪಾತಿವ್ರತ್ಯವಿಶೇಷಭಂಜನಪಟುರ್ವೇದಾಂತವೇದೀ ಮಹಾನ್ |
ದೈತ್ಯವ್ರಾತವಿನಾಶನಾದಿಚತುರೋ ಬೌದ್ಧಾವತಾರೋ ಹರಿಃ
ಶ್ರೀಮಾನ್ಸಿಂಹಗಿರೀಶ್ವರಃ ಕರುಣಯಾ ದದ್ಯಾತ್ಸದಾ ಮಂಗಳಮ್ ||
ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ || 09 ||

[ಧರ್ಮ ಯಾವುದು? ಅಧರ್ಮ ಯಾವುದು? ಎಂಬುದನ್ನರಿತ ಧರ್ಮ ಮಾರ್ಗದಲ್ಲಿ ಪ್ರತಿಷ್ಠಿತನಾದ, ರಾಜತ್ವವನ್ನು ಬಿಟ್ಟು ವೇದಾಂತಿಯಾಗಿ ಭಿಕ್ಷಾಟನ ಗೈದ, ದೈತ್ಯರ ಮತ್ತು ದುಷ್ಟರ ಒಳಮನಸ್ಸಿನ ಕೆಡುಕುಗಳನ್ನು ನಾಶಗೊಳಿಸಿದ ಚತುರನಾದ ಬೌದ್ಧ; ಹರಿಯ ಅವತಾರಿಯಾಗಿ ಈ ಸಿಂಹಗಿರಿಯಲ್ಲಿರುವನು. ಆತ ಕರುಣೆಯಿಂದ ನಮ್ಮನ್ನು ಹರಸಲಿ. ಶುಭ ಮುಹೂರ್ತದ ಸಮಯ ಎಲ್ಲರೂ ಇತ್ತ ಚಿತ್ತೈಸಿರಿ. ]

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ |
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಂಘ್ರಿಯುಗಂ ಸ್ಮರಾಮಿ ||
ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ ||

ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ಪದಕಮಲಗಳನ್ನು ಯಾವಕ್ಷಣದಲ್ಲಿ ಸ್ಮರಿಸುವೆನೋ ಆ ಕ್ಷಣವೇ ಶುಭಕ್ಷಣವಾಗಿದೆ. ಆ ಲಗ್ನವೇ ಸುಲಗ್ನವಾಗಿದೆ. ಆ ದಿನವೇ ಸುದಿನ, ಅದೇ ತಾರಾಬಲ, ಅದೇ ಚಂದ್ರಬಲ, ಅದೇ ವಿದ್ಯಾಬಲ, ಅದೇ ದೈವಬಲವಾಗಿದೆ... ಇನ್ನೇನು ಶುಭಸ್ಯ ಶೀಘ್ರಂ ಎಂದು ಎಲ್ಲರೂ ಇಲ್ಲಿ ಮನಸ್ಸಿಟ್ಟು ಹರಸಿರಿ...

**ಮೇಘವ್ರಾತವಿನಾಶಕಃ ಕಲಿಯುಗಾಂತೇಽಶ್ವಾಧಿರೂಢೋ ಮಹಾನ್ಮಾಯಾವೀ ಬಹುಭಾನುಕೋಟಿಸದೃಶೋ ಭೀಮಾದಿಚಕ್ರಾಯುಧಃ | ಆಶಾನೀಕೃತ ಕಲ್ಕಿರೂಪವಿಭವಃ ಕಲ್ಕ್ಯಾವತಾರೋ ಹರಿಃ ಶ್ರೀಮಾನ್ಸಿಂಹಗಿರೀಶ್ವರಃ ಕರುಣಯಾ ದದ್ಯಾತ್ಸದಾ ಮಂಗಳಮ್ ||**

**ಸುಮುಹೂರ್ತೇ ಸಾವಧಾನ || ಸುಲಗ್ನೇ ಸಾವಧಾನ || 10 ||**

[ಕೆಟ್ಟದ್ದನ್ನೇ ನೆಟ್ಟು ಬೆಳೆಸುವ ಹಲವು ಕೋಮುಗಳನ್ನು ವಿನಾಶಗೊಳಿಸುವ, ಕಲಿಯುಗಾಂತ್ಯದಲ್ಲಿ ಮಹಾ ಮಾಯಾವಿಯಾಗಿ ಕುದುರೆಯೇರಿ ಬರಲಿರುವ, ಕೋಟಿಸೂರ್ಯರಂತೆ ಕಂಗೊಳಿಪ, ದೊಡ್ಡ ದೊಡ್ಡ  ಆಯುಧಗಳನ್ನು ಎತ್ತಿ ಬಳಸುವ ಚಕ್ರಧಾರಿಯಾದ, ವೈಭವದಿಂದ ಭಕ್ತರ ಮಾನಸದಲ್ಲಿ ನೆಲೆಗೊಂಡ ಕಲ್ಕ್ಯಾವತಾರಿಯಾದ ಶ್ರೀಹರಿಯು ಸಿಂಹಗಿರಿವಾಸಿಯಾಗಿದ್ದು, ಕರುಣೆಯಿಂದ ನಮ್ಮನ್ನು ಹರಸಲಿ. **ಶುಭ ಮುಹೂರ್ತದ ಸಮಯ ಎಲ್ಲರೂ ಇತ್ತ ಚಿತ್ತೈಸಿರಿ. ]**

**ಸಂಗ್ರಾಹಕಃ**

**ಪರಮೇಶ್ವರ ಪುಟ್ಟನ್ಮನೆ**

{ಜನರ ಬಾಯಿಂದ ಬಾಯಿಗೆ ಹರಿದುಬಂದ ಈ ಮಂಗಲಾಷ್ಟಕಗಳು, ವ್ಯಾಕರಣ ದೋಷಗಳಿಂದ ಕೂಡಿವೆ. ಅದನ್ನು ತಿದ್ದಲಾಗದು! ಮತ್ತು ತಿದ್ದಿದಂತೆ ಹೇಳಲಾಗದು! ಎಂಬ ನಿರ್ಣಯಕ್ಕೆ ಬಂದಿದ್ದೇನೆ. ಆದರೂ ವಕ್ತ್ರಭಿಪ್ರಾಯವನ್ನು ಲಕ್ಷಿಸಿ, ತಕ್ಕ ಮಟ್ಟಿಗೆ ನ್ಯಾಯ ಸಲ್ಲುವಂತೆ ಸರಳವಾಗಿ ಅನುವಾದಿಸಿದ್ದೇನೆ. ಮೊದಲ ಶ್ಲೋಕ ವಿಘ್ನೇಶ್ವರನಲ್ಲಿ ಬೇಡಿಕೊಂಡ ಮಂಗಲವೂ; ಉಳಿದ ಎಂಟು ಪದ್ಯಗಳು ಮಂಗಲಾಷ್ಟಕಗಳಾಗಿವೆ... ಕೊನೆಯಲ್ಲಿ ಬೌದ್ಧ ಮತ್ತು ಕಲ್ಕಿ ಅವತಾರಗಳ ಪ್ರಶಂಸೆಗಳನ್ನೂ ಸೇರಿಸಲಾಗಿದೆ. ಇವುಗಳನ್ನು ಶಿರಸಿ, ಸಿದ್ದಾಪುರ, ಯಲ್ಲಾಪುರ  ಮತ್ತು ಗೋಕರ್ಣದ ಕೆಲವು ಭಾಗಗಳು ಹೀಗೆ ಹಲವು ಕಡೆಗಳಲ್ಲಿ ಮದುವೆಯ ಶುಭ ಸಂದರ್ಭದಲ್ಲಿ ನೂತನ ವಧೂವರರ ಮಾಲಾಧಾರಣ ವೇಳೆಯಲ್ಲಿ ಪಠಿಸುತ್ತಾರೆ...}